# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1526 |
| ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 19-03-2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಜಕ್ಕೂರು ವಾರ್ಡ್ ಸಂಖ್ಯೆ-5 ರಲ್ಲಿ ಬರುವ ಶ್ರೀನಿವಾಸಪುರ ಬಂಡೆ ರಸ್ತೆ ಮತ್ತು ಅಕ್ಕ ಪಕ್ಕದ ಬಡಾವಣೆಗಳಿಗೆ ಬೆಂಗಳೂರು ಜಲಮಂಡಳಿಯಿಂದ ಕಾವೇರಿ ನೀರು ಹಾಗೂ ಸಿವಯೆಜ್ (ಯುಜಿಡಿ) ಸಂಪರ್ಕವನ್ನು ಕಲ್ಪಿಸಲಾಗಿದೆಯೇ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಜಕ್ಕೂರು ವಾರ್ಡ್ ಸಂಖ್ಯೆ:05 ರಲ್ಲಿ ಬರುವ ಶ್ರೀನಿವಾಸಪುರ ಬಂಡೆ ರಸ್ತೆ ಪ್ರದೇಶವು 110 ಹಳ್ಳಿಗಳ ಪ್ರದೇಶದ ವ್ಯಾಪ್ತಿಗೆ ಒಳಪಟ್ಟಿದ್ದು, ಸದರಿ ಪ್ರದೇಶಕ್ಕೆ ಬೆಂಗಳೂರು ಜಲಮಂಡಳಿ ವತಿಯಿಂದ 110 ಹಳ್ಳಿಗಳ ಯೋಜನೆಯಡಿಯಲ್ಲಿ ಕಾವೇರಿ ನೀರು ಸರಬರಾಜಿನ ಕೊಳವೆಗಳನ್ನು ಅಳವಡಿಸಲಾಗಿದ್ದು, ಕಾವೇರಿ 5ನೇ ಹಂತದ ಯೋಜನೆಯ ಕಾಮಗಾರಿಯು ಪೂರ್ಣಗೊಂಡ ನಂತರ ನೀರು ಸರಬರಾಜನ್ನು ಮಾಡಲಾಗುವುದು.<br><br>ಶ್ರೀನಿವಾಸಪುರ ಬಂಡೆ ರಸ್ತೆಯಲ್ಲಿ ಬೆಂಗಳೂರು ಜಲಮಂಡಳಿಯ 110 ಹಳ್ಳಿಗಳ ಯೋಜನೆಯಡಿಯಲ್ಲಿ ಒಳಚರಂಡಿ ಕೊಳವೆಗಳನ್ನು ಅಳವಡಿಸುವ (ಯುಜಿಡಿ-ಲ್ಯಾಟರಲ್ಸ್) ಕಾಮಗಾರಿಯು ಪ್ರಗತಿಯಲ್ಲಿದ್ದು, ಸದರಿ ಒಳಚರಂಡಿ ವ್ಯವಸ್ಥೆಯನ್ನು ಕಾವೇರಿ 5ನೇ ಹಂತದ ಯೋಜನೆಯ ಅಡಿಯಲ್ಲಿ ಎಸ್.ಟಿ.ಪಿ ನಿರ್ಮಾಣ ಮತ್ತು ಟ್ರಂಕ್ ಸೀವರ್ ಅಳವಡಿಸುವ ಕಾಮಗಾರಿಯು ಪೂರ್ಣಗೊಂಡ ನಂತರ ಒಳಚರಂಡಿ ವ್ಯವಸ್ಥೆ ಕಲ್ಪಿಸಲಾಗುವುದು.<br><br>ಶ್ರೀನಿವಾಸಪುರ ಬಂಡೆ ರಸ್ತೆಯ ಅಕ್ಕ ಪಕ್ಕದ ಬಡಾವಣೆಗಳಾದ ಕೋಗಿಲು ವಿಲೇಜ್, ಕೋಗಿಲು ಲೇಔಟ್, ಅಗ್ರಹಾರ ವಿಲೇಜ್ ಮತ್ತು ಅಗ್ರಹಾರ ಲೇಔಟ್ ಗಳಲ್ಲಿ ಈಗಾಗಲೇ ಕಾವೇರಿ ನೀರು ಹಾಗೂ ಒಳಚರಂಡಿ ಕೊಳವೆ ಮಾರ್ಗಗಳನ್ನು ಬೆಂಗಳೂರು ಜಲಮಂಡಳಿ ವತಿಯಿಂದ ಅಳವಡಿಸಲಾಗಿದ್ದು, ಸದರಿ ನೀರಿನ ಕೊಳವೆ ಮಾರ್ಗಗಳಲ್ಲಿ ಪರೀಕ್ಷಾರ್ಥವಾಗಿ ನೀರು ಸರಬರಾಜು ಮಾಡಲಾಗುತ್ತಿದೆ. |
| ಆ | ಇಲ್ಲದಿದ್ದಲ್ಲಿ ಇಲ್ಲಿಯವರೆವಿಗೂ ಕಾವೇರಿ ನೀರು ಹಾಗೂ ಹಾಗೂ ಸಿವಯೆಜ್ (ಯುಜಿಡಿ) ಸಂಪರ್ಕವನ್ನು ಕಲ್ಪಿಸದಿರಲು ಕಾರಣಗಳೇನು; ಮತ್ತು ಯಾವ ಕಾಲಮಿತಿಯೊಳಗೆ ಕಾಮಗಾರಿಗಳನ್ನು ಪ್ರಾರಂಭಿಸಲಾಗುವುದು? | ಸದರಿ ಪ್ರದೇಶಗಳಲ್ಲಿ ಬೆಂಗಳೂರು ಜಲಮಂಡಳಿಯ ವತಿಯಿಂದ 110 ಹಳ್ಳಿಗಳ ಯೋಜನೆಯಡಿಯಲ್ಲಿ ನೀರಿನ ಮತ್ತು ಒಳಚರಂಡಿ ಕೊಳವೆಗಳನ್ನು ಅವಳಡಿಸುವ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಕಾವೇರಿ 5ನೇ ಹಂತದ ಕಾಮಗಾರಿಗಳು ಪೂರ್ಣಗೊಂಡ ನಂತರ ನೀರು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಪೂರ್ಣ ಪ್ರಮಾಣದಲ್ಲಿ ಕಲ್ಪಿಸಲಾಗುವುದು. |

**ಸಂಖ್ಯೆ: ನಅಇ 34 ಎಂಎನ್ಐ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ.